


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 1209 (1447)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

ವಿಷಯ : ತುಮಕೂರು ಜಿಲ್ಲೆ ರಾಷ್ಟ್ರೀಯ ಹೆದ್ದಾರಿ 150ಎ ಕಾಮಗಾರಿ ಬಗ್ಗೆ

(ಅ) ತುಮಕೂರು ಜಿಲ್ಲೆ, ರಾಷ್ಟ್ರೀಯ ಹೆದ್ದಾರಿ 150ಎ ರಲ್ಲಿ ಕೆ.ಬಿ.ಕ್ರಾಸ್-ನೆಲ್ಲಿಗೆರೆ ರಸ್ತೆ ನಿರ್ಮಾಣ ಮತ್ತು ಕೆ.ಬಿ.ಕ್ರಾಸ್-ಹುಳಿಯಾರು ರಸ್ತೆ ನಿರ್ಮಾಣ ಸಂಬಂಧ ಭೂ ಸ್ವಾಧೀನ ಪ್ರಕ್ರಿಯೆ ಯಾವಾಗ ಪ್ರಾರಂಭವಾಗಿದೆ ಮತ್ತು ಸದರಿ ಕಾಮಗಾರಿ ಯಾವ ಹಂತದಲ್ಲಿದೆ ; (ಪೂರ್ಣ ವಿವರಗಳೊಡನೆ ಮಾಹಿತಿ ನೀಡುವುದು)

(ಆ) ಈ ಎರಡೂ ರಸ್ತೆ ನಿರ್ಮಾಣ/ನಿರ್ವಹಣೆ ಕಾಮಗಾರಿ ಪ್ರಾರಂಭವಾಗಿದ್ದಲ್ಲಿ, ಟೆಂಡರ್ ಪ್ರಕ್ರಿಯೆ ಗುತ್ತಿಗೆದಾರರ ಸಂಪೂರ್ಣ ವಿವರಗಳನ್ನು ಒದಗಿಸುವುದು ;

(ಇ) ರಾಷ್ಟ್ರೀಯ ಹೆದ್ದಾರಿ 150ಎ ಜೇವರ್ಗಿ-ಚಾಮರಾಜನಗರ ಸೆಕ್ಷನ್‌ನಲ್ಲಿ ಕೆ.ಬಿ.ಕ್ರಾಸ್-ನೆಲ್ಲಿಗೆರೆ ರಸ್ತೆ ನಿರ್ಮಾಣ ಮತ್ತು ನಿರ್ವಹಣೆ ಕಾಮಗಾರಿ ಕುಂಠಿತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಸದರಿ ಕಾಮಗಾರಿ ತ್ವರಿತವಾಗಿ ಪೂರ್ಣಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ;

(ಉ) ಸದರಿ ಕಾಮಗಾರಿ ವಿಳಂಬಕ್ಕೆ ಕಾರಣರಾದ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು ?